**ನಿಯಂತ್ರಕರ ಕಚೇರಿ, ರಾಜ್ಯ ಲೆಕ್ಕಪತ್ರ ಇಲಾಖೆ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು,**

**ಅಧಿಸೂಚನೆ**

**ಸಂಖ್ಯೆ:ರಾಲೆಪ/ 15/ ಸಿನೇಞ/2001, ಬೆಂಗಳೂರು, ದಿನಾಂಕ: 27ನೇ ಜನವರಿ 2006**

**ವಿಷಯ:** ನೇರ ನೇಮಕಾತಿ ಮೂಲಕ ಕೊರತೆಯಿರುವ ಎರಡು ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹುದ್ದೆಗಳನ್ನು ಭರ್ತಿ ಮಾಡಲು ಮರು ಪ್ರಕಟಣೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂ:ಡಿಪಿಎಆರ್/13 ಎಸ್‌ಬಿಸಿ/2001 ದಿನಾಂಕ:21.11.2001
2. ಈ ಕಚೇರಿಯ ಸಮ ಸಂಖ್ಯೆಯ ಅಧಿಸೂಚನೆ ದಿ:29:1:2002
3. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಕನಿ/ಬಿ ಅಂಡ್ ಆರ್/ತಸ/ಸಿಆರ್/59/ 2005-06 ದಿನಾಂಕ:07.01.2006

ರಾಜ್ಯ ಲೆಕ್ಕ ಪತ್ರ ಇಲಾಖೆಯಲ್ಲಿ ಉಲ್ಲೇಖಿತ (1) ರ ಸರ್ಕಾರದ ಅಧಿಸೂಚನೆಯಂತೆ ನೇರ ನೇಮಕಾತಿ ಮೂಲಕ ಕೊರತೆಯಿರುವ ಪರಿಶಿಷ್ಟ ಜಾತಿಯ ಐದು ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹುದ್ದೆಗಳನ್ನು ಗುರುತಿಸಿ ಭರ್ತಿಮಾಡಲು ಅರ್ಜಿಗಳನ್ನು ಉಲ್ಲೇಖ(2) ರಲ್ಲಿ ಆಹ್ವಾನಿಸಲಾಗಿತ್ತು. ಆದರೆ ಮುಖ್ಯಪಟ್ಟಿ ಮತ್ತು ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ಇಬ್ಬರು ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗಿಲ್ಲದ ಕಾರಣ ಉಲ್ಲೇಖ (3) ರ ಪತ್ರದನ್ವಯ ಈ ಹುದ್ದೆಗಳನ್ನು ಭರ್ತಿಮಾಡಲು ಮರು ಪ್ರಕಟಣೆ ನೀಡಲಾಗಿದೆ. ಈ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರ ಕೆಳಕಂಡತಿದೆ.

| ಹುದ್ದೆಯ ಹೆಸರು | ಮೀಸಲಾತಿ ವರ್ಗ | ಅರ್ಹತಾ ಶ್ರೇಷ್ಠತೆಗೆ ಮೀಸಲಿಟ್ಟ ಹುದ್ದೆ | ಒಟ್ಟು |
|---|---|---|---|
| ಬೆರಳಚ್ಚುಗಾರರು | ಪರಿಶಿಷ್ಠ ಜಾತಿ | 2 | 2 |

**ಕನಿಷ್ಠ ವಿದ್ಯಾರ್ಹತೆ:** ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಮತ್ತು ಕನ್ನಡ ಹಿರಿಯ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

**ವಯೋಮಿತಿ:** ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸುವ ದಿನಾಂಕಕ್ಕೆ 18 ವರ್ಷ ತುಂಬಿರಬೇಕು. ಮತ್ತು ಗರಿಷ್ಠ ವಯೋಮಿತಿ 40 ವರ್ಷ ಮೀರಿರಬಾರದು. (ವಯೋಮಿತಿ 29 ರಿಂದ 40 ರಲ್ಲಿನ ಅಭ್ಯರ್ಥಿಗಳಿಗೆ ನೇಮಕಾತಿಯಲ್ಲಿ ಆದ್ಯತೆ ನೀಡಲಾಗುವುದು).

**ಸಾಮಾನ್ಯ ಷರತ್ತುಗಳು**

1) ಅಭ್ಯರ್ಥಿಗಳು ಮುದ್ರಿತವಾದ ಸರ್ಜಿ ನಮೂನೆ 1ನ್ನು ನಿಗದಿತ ದರ ಪಾವತಿಸಿ ಸರ್ಕಾರಿ ಕೇಂದ್ರ ಪ್ರಸ್ತಕ ಮಳಿಗೆ (ಸೆಂಟ್ರಲ್ ಬುಕ್ ಡಿಪೋ), ಇನ್ನಿತರ ಜಿಲ್ಲೆಯ ಸರ್ಕಾರಿ ಮುದ್ರಣಾಲಯ ಪುಸ್ತಕ ಮಳಿಗೆ, ರಾಜ್ಯದ ಅಂಗೀಕೃತ ಪುಸ್ತಕ ಮಾರಾಟಗಾರರ ಹಾಗೂ ಸರ್ಕಾರಿ ಅಂಗೀಕೃತ ಪುಸ್ತಕ ಮಳಿಗೆಯಿಂದ ಖರೀದಿಸಿ ಭರ್ತಿ ಮಾಡಿ ದ್ವಿಪತ್ರಿಕೆಯಲ್ಲಿ ಸಲ್ಲಿಸತಕ್ಕದ್ದು.
2) ಅಭ್ಯರ್ಥಿಗಳು ನಿಯಮಾನುಸಾರ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾತಿ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಮಾತ್ರ ಅರ್ಜಿಗೆ ಲಗತ್ತಿಸಬೇಕು.
3) ಜನ್ಮ ದಿನಾಂಕಕ್ಕೆ ಮತ್ತು ವಿದ್ಯಾರ್ಹತೆಗೆ ಸಂಬಂಧಿಸಿದ ಪ್ರಮಾಣ ಪತ್ರಗಳ ಪ್ರತಿಯನ್ನು ಸ್ವಯಂ ದೃಢೀಕರಿಸಿ ಲಗತ್ತಿಸಬೇಕು. (ಜನ್ಮ ದಿನಾಂಕ ಇರುವ ಎಸ್.ಎಸ್‌ಎಲ್.ಸಿ ಅಂಕಪಟ್ಟಿ, ಟಿ.ಸಿ. ಕ್ಯುಮ್ಯುಲೇಟೀವ್ ರೆಕಾರ್ಡ್ ಇವುಗಳ ಪ್ರತಿ)
4) ಅಭ್ಯರ್ಥಿಗಳು ಅರ್ಜಿಯ ಜೊತೆಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ದೇಹದಾರ್ಢ್ಯತೆಯ ಪ್ರಮಾಣ ಪತ್ರ ಲಗತ್ತಿಸತಕ್ಕದ್ದು.
5) ಅಭ್ಯರ್ಥಿಗಳು ಇಬ್ಬರು ಗಣ್ಯ ವ್ಯಕ್ತಿಗಳಿಂದ ಗುಣ ಮತ್ತು ನಡತೆಯ ಬಗ್ಗೆ ಪ್ರಮಾಣ ಪತ್ರ ಪಡೆದು ಲಗತ್ತಿಸತಕ್ಕದ್ದು.
6) ಈಗಾಗಲೇ ಸರ್ಕಾರಿ/ಅರೆ ಸರ್ಕಾರಿ/ನಿಗಮ/ ಇತ್ಯಾದಿ ಸಂಸ್ಥೆಗಳಲ್ಲಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಪ್ರಾಧಿಕಾರಿಗಳ ಮುಖಾಂತರ ಅರ್ಜಿಯನ್ನು ಸಲ್ಲಿಸತಕ್ಕದ್ದು.
7) ಈ ಅಧಿಸೂಚನೆಗೆ ಅನುಗುಣವಾಗಿ ಅಭ್ಯರ್ಥಿಯು ಆಯ್ಕೆಯಾದರೆ ಅಂತಹವರು ಕರ್ನಾಟಕ ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿಬೇಕು.
8) ಭರ್ತಿ ಮಾಡಿದ ಅರ್ಜಿಗಳನ್ನು ಸೂಕ್ತ ಅಡಕಗಳೊಂದಿಗೆ "ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಜಲ ಮಂಡಳಿ ಕಟ್ಟಡ, 6ನೇ ಮಹಡಿ ಕಾವೇರಿಭವನ, ಬೆಂಗಳೂರು-560 009" ಇವರ ವಿಳಾಸಕ್ಕೆ ಲಕೋಟೆಯ ಮೇಲೆ "ಪರಿಶಿಷ್ಟ ಜಾತಿ ಬೆರಳಚ್ಚುಗಾರರ ಬ್ಯಾಕ್ ಲಾಗ್ ಹುದ್ದೆಗೆ ಅರ್ಜಿ" ಎಂಬುದಾಗಿ ನಮೂದಿಸಿ ದಿನಾಂಕ 15.3.2006 ರಂದು ಸಮಯ 4.30 ರ ಒಳಗಾಗಿ ತಲುಪುವಂತೆ ಕಳುಹಿಸತಕ್ಕದ್ದು. ನಿಗದಿತ ದಿನಾಂಕದ ನಂತರ ತಲುಪಿದ ಅರ್ಜಿಗಳನ್ನು ಮತ್ತು ಅಸಮರ್ಪಕ ಹಾಗೂ ಅಪೂರ್ಣ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

ನಿಯಂತ್ರಕರು
ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.

ಪಿ.ಆರ್. 89

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ**

**ಜಂಟಿ ನಿರ್ದೇಶಕರವರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ**

**ಪ್ರಕಟಣೆ ಸಂ.ಜಿಕೈಕೇ/ಶಿ/ಸ1/ಅಬಿಭಾ/2005-06, ದಿನಾಂಕ: 1ನೇ ಫೆಬ್ರವರಿ 2006**

ಈ ಕಛೇರಿಯ ಕಾರು ಸಿಎಜಿ 7614ನ 2003-04ನೇ ಸಾಲಿನ ರೂ.16,256/- ಮತ್ತು 2004-05ನೇ ಸಾಲಿನ ರೂ.8,205/- ಮೌಲ್ಯದ ಅನುಪಯುಕ್ತ ಬಿಡಿ ಭಾಗಗಳನ್ನು ದಿನಾಂಕ 27.3.2006ರ ಸೋಮವಾರದಂದು ಬೆಳಿಗ್ಗೆ 11-00 ಗಂಟೆಗೆ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗದ ಆವರಣದಲ್ಲಿ ಹರಾಜು ಮಾಡಲಾಗುವುದು. ಹರಾಜಿನ ನಿಯಮಗಳನ್ನು ಕಛೇರಿ ಕೆಲಸದ ದಿನಗಳಲ್ಲಿ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದಾಗಿರುತ್ತದೆ.

ಜಂಟಿ ನಿರ್ದೇಶಕರು,
ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ.

ಪಿ.ಆರ್. 91

## ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ-576101

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ನಂ. ಕಾನಿಇಂ: ಬಂಮೀವಿ:ಉಡುಪಿ:ಎಇ:ಟೆಂಡರು ಸೂಚನೆ:1299:/2005-06 ದಿನಾಂಕ: 4ನೇ ಫೆಬ್ರವರಿ 2006**

ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ಈ ಕೆಳಕಂಡ ಕಾಮಗಾರಿಗಾಗಿ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ, ಹೆಸರನ್ನು ನೋಂದಾಯಿಸಲಾದ ಅರ್ಹ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಗದಿತ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ದಿನಾಂಕ:27.2.2006 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು. ಟೆಂಡರನ್ನು ಸಾಧ್ಯವಾದಲ್ಲಿ ಅದೇ ದಿನ 4.30 ಗಂಟೆಗೆ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಟೆಂಡರನ್ನು ಒದಗಿಸಿದಲ್ಲಿ ತಿರಸ್ಕರಿಸಲಾಗುವುದು.

ಖಾಲಿ ಟೆಂಡರು ಫಾರಂಗಳಿಗಾಗಿ ಅರ್ಜಿಯನ್ನು ನಿಗಧಿಪಡಿಸಿದ ಬೆಲೆಯೊಂದಿಗೆ (ಅದನ್ನು ಹಿಂತಿರುಗಿಸುವುದಿಲ್ಲ) ದಿನಾಂಕ:22.2.2006 ರವರೆಗೆ ಕಛೇರಿ ಕೆಲಸದ ಎಲ್ಲಾ ದಿನಗಳಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಗುತ್ತಿಗೆದಾರರು ಅರ್ಜಿ ಫಾರಂನೊಂದಿಗೆ ರಿಜಿಸ್ಟ್ರೇಷನ್ ನವೀಕರಣ ಸರ್ಟಿಫೈಡ್ ಪ್ರತಿಯನ್ನು ಹಾಗೂ ರೂ. 2.10 ಲಕ್ಷಕ್ಕೆ ಮೇಲ್ಪಟ್ಟ ಒಂದು ಕಟ್ಟಡ ಕಾಮಗಾರಿಯನ್ನು ನಿರ್ವಹಿಸಿದ ಅರ್ಹತೆ ಪತ್ರವನ್ನು ಲಗ್ತೀಕರಿಸಿರಬೇಕು, ಇಲ್ಲವಾದಲ್ಲಿ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ.

ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 24.2.2006 ರಂದು ವಿತರಿಸಲಾಗುವುದು. ಹೆಚ್ಚಿನ ವಿವರಗಳನ್ನು ವಿಭಾಗೀಯ ಕಛೇರಿಯಲ್ಲಿ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ನೀಡಲಾಗುವುದು

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರು ಅಂದಾಜು ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಅವಧಿ | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ | ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ದ.ಕ. ಜಿಲ್ಲೆ ಮಂಗಳೂರು ತಾ. ಮಂಗಳೂರು ಹಳೇ ಬಂದರು ಕಛೇರಿಗಾಗಿ ಹೊಸ ಆಡಳಿತ ಕಛೇರಿ ಕಟ್ಟಡಕ್ಕೆ ಹೆಚ್ಚುವರಿ ಕಟ್ಟಡ ನಿರ್ಮಾಣ ಕಾಮಗಾರಿ | ರೂ. 6.90 ಲಕ್ಷ | ರೂ. 13,800 | 2 ತಿಂಗಳು (ಮಳೆಗಾಲದ ಅವಧಿ ಹೊರತು ಪಡಿಸಿ) | ಐಟಂವಾರು | ರೂ.1500+ ತೆರಿಗೆ | iiiನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆ:**

1. ಕಾಮಗಾರಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಸ್ವಂತ ಖರ್ಚಿನಿಂದ ಪೂರೈಸಿಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸಾಮಾಗ್ರಿಗಳ ಪ್ರಮಾಣ ಪತ್ರವನ್ನು ಒದಗಿಸುವುದು.
2. ಮೇಲೆ ತಿಳಿಸಿದ ದಿನಾಂಕಗಳಂದು ಸರ್ಕಾರಿ ರಜೆಗಳು ಬಂದರೆ ಅದರ ಮುಂದಿನ ದಿನಾಂಕವನ್ನು ಪರಿಗಣಿಸುವುದು.
3. ಇ.ಎಂ.ಡಿ. ಯನ್ನು ಡಿಮಾಂಡ್ ಡ್ರಾಫ್ಟ್, ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಷೆಡ್ಯೂಲ್ಡ್ ಬ್ಯಾಂಕಿನ ಇಲ್ಲವೆ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡಮಾಡಿದ ಬ್ಯಾಂಕರ್ಸ್ ಚೆಕ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು, ಇ.ಎಂ.ಡಿ. ಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ.
4. ಗುತ್ತಿಗೆದಾರರು ರೂ. 2.10 ಲಕ್ಷಕ್ಕೆ ಮೇಲ್ಪಟ್ಟ (ಕಾಮಗಾರಿಯ ಮೊತ್ತದ ಶೇಕಡಾ 30% ಭಾಗದಷ್ಟು) ಇದೇ ರೀತಿಯ ಒಂದೇ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕಳೆದ ಐದು ವರ್ಷಗಳಲ್ಲಿ ಒಂದೇ ಹಣಕಾಸು ವರ್ಷದ ಅವಧಿಯೊಳಗೆ ಮಾಡಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಲಗ್ತೀಕರಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು.

**ಬಿ. ಗೋಪಾಲ ನಾಯಕ್**

ಪಿ.ಆರ್. 72

ಕಾರ್ಯನಿರ್ವಾಹಕ ಇಂಜಿನಿಯರ್,
ಬಂದರು ಮತ್ತು ಮೀನುಗಾರಿಕಾ ವಿಭಾಗ ಉಡುಪಿ.

## ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶನಾಲಯ,

## 8ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಅಂಬೇಡ್ಕರ್ ರಸ್ತೆ, ಬೆಂಗಳೂರು -1

**ಟೆಂಡರ್ ಪ್ರಕಟಣೆ ಸಂಖ್ಯೆ: ಡಿವಿಇ:ಎಸ್.ಐ.ವಿ.ಇ/ಕೈಪಿಡಿ ಮುದ್ರಣ/2005-06 ದಿನಾಂಕ: 21ನೇ ಜನವರಿ 2006**

ವೃತ್ತಿ ಶಿಕ್ಷಣದ ವಿವಿಧ ಕೋರ್ಸುಗಳನ್ನು ಬೋಧಿಸುತ್ತಿರುವ ಉಪನ್ಯಾಸಕರಿಗೆ ಅವಶ್ಯಕವಾಗಿ ಬೇಕಾದ ಉಪನ್ಯಾಸಕರ ಕೈಪಿಡಿಗಳನ್ನು ಮುದ್ರಿಸಿ ಸರಬರಾಜು ಮಾಡಲು ದೊಡ್ಡ ಪ್ರಮಾಣದಲ್ಲಿ ಮುದ್ರಣ ಅನುಭವವಿರುವ ವೆಬ್‌ಕಿಂಗ್ ಪ್ರಿಂಟಿಂಗ್ ಪ್ರೆಸ್‌ವುಳ್ಳ, ಅನುಭವ ಇರುವ ಪ್ರಿಂಟರ್‌ಗಳಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಮುದ್ರಣದ ಅಂದಾಜು ಮೌಲ್ಯ ರೂ.5.00 ಲಕ್ಷ ದಿಂದ ರೂ 6.00 ಲಕ್ಷಗಳು ಆಗಿರುತ್ತದೆ.

ಈ ಪುಸ್ತಕಗಳನ್ನು ಮುದ್ರಿಸಲಿಚ್ಚಿಸುವವರು ಟೆಂಡರ್ ನಮೂನೆಯನ್ನು ದಿನಾಂಕ:04.02.2006 ರ ನಂತರ ರೂ.100.00 (ಒಂದು ನೂರು ರೂಪಾಯಿ ಮಾತ್ರ) ಚಲನ್ ಮೂಲಕ ಲೆಕ್ಕ ಶೀರ್ಷಿಕೆ: 0202-01-102-1-09ಕ್ಕೆ ಪಾವತಿಸಿ ವಿವರಗಳನ್ನು ಈ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಸೀಲ್ ಮಾಡಿದ ಟೆಂಡರ್ ಜೊತೆಗೆ ಇ.ಎಂ.ಡಿ ಹಣ ರೂ 5000/-ಗಳನ್ನು ಬ್ಯಾಂಕ್ ಡಿ.ಡಿ.ಮೂಲಕ ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, 8ನೇ ಮಹಡಿ. ವಿ.ವಿ.ಮುಖ್ಯ ಗೋಪುರ, ಡಾ:ಬಿ.ಆರ್. ಅಂಬೇಡ್ಕರ್ ಬೆಂಗಳೂರು-1 ಇವರ ಹೆಸರಿಗೆ ಪಡೆದು ಶ್ರೀ ಎಂ.ಬಿ ಅಂಗಡಿ, ಉಪ ನಿರ್ದೇಶಕರು (ಎಸ್.ಐ.ವಿ.ಇ) ಇವರಿಗೆ ಸಲ್ಲಿಸತಕ್ಕದು, ತಡವಾಗಿ ಮತ್ತು ಅಪೂರ್ಣವಾಗಿ ಬಂದಂತಹ ಟೆಂಡರುಗಳನ್ನು ಕಾರಣ ನೀಡದೆ ತಿರಸ್ಕರಿಸಲಾಗುವುದು. ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಮತ್ತು ಮುದ್ರಣ ಕಾರ್ಯ ಕಡಿಮೆ ಮಾಡುವ /ಹೆಚ್ಚು ಮಾಡುವ, ರದ್ದು ಪಡಿಸುವ ಹಕ್ಕು ನಿರ್ದೇಶಕರದಾಗಿರುತ್ತದೆ. ಸ್ವೀಕೃತವಾದ ಟೆಂಡರುಗಳನ್ನು ದಿನಾಂಕ:25.02.2006 ರಂದು ಸಂಜೆ 4.30 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ನಿರ್ದೇಶಕರ ಕೊಠಡಿಯಲ್ಲಿ ತೆರೆಯಲಾಗುವುದು.

ನಿರ್ದೇಶಕರು
ವೃತ್ತಿ ಶಿಕ್ಷಣ ನಿರ್ದೇಶನಾಲಯ

**ಸಂಖ್ಯೆ: ಡಿವಿಇ:ಎಸ್.ಐ.ವಿ.ಇ/ಕೈಪಿಡಿ ಮುದ್ರಣ/2005-06**

ವೃತ್ತಿ ಶಿಕ್ಷಣ ಇಲಾಖೆಯ ವಿವಿಧ ವಿಷಯಗಳ ಉಪನ್ಯಾಸಕರ ಕೈಪಿಡಿಗಳ ಮುದ್ರಣದ ನಿಭಂಧನೆಗಳು ಈ ಕೆಳಕಂಡಂತಿವೆ.

1. ಈ ಎಲ್ಲಾ ಕೈಪಿಡಿಗಳನ್ನು 60-GSM (M.P.M) ಗುಣಮಟ್ಟದ A4 ಸೈಜ್‌ನಲ್ಲಿ ಹಾಳೆಯ ಎರಡೂ ಬದಿಗಳಲ್ಲಿ ಮುದ್ರಿಸತಕ್ಕದ್ದು. ಕೈಪಿಡಿಗಳಲ್ಲಿ ಬರುವ ರೇಖಾ ಚಿತ್ರಗಳು ಹಾಗೂ ಇತರೆ ಚಿತ್ರಗಳನ್ನು ಸೂಚಿಸಿರುವ ಪುಟಗಳಲ್ಲಿಯೇ ಮುದ್ರಿಸತಕ್ಕದ್ದು.
2. ಹಾಳೆಯ ಎರಡು ಬದಿಯಲ್ಲೂ ಮುದ್ರಿಸತಕ್ಕದ್ದು. ಒಂದು ಹಾಳೆಗೆ ತಗಲುವ ದರವನ್ನು ನಮೂದಿಸಿ ದರಪಟ್ಟಿಯನ್ನು ನೀಡುವುದು.
3. ಪ್ರತಿ ಪುಟಕ್ಕೂ ಅನುಕ್ರಮವಾಗಿ ಪುಟ ಸಂಖ್ಯೆ ನಮೂದಿಸಿ, ಸ್ಟೇಪ್ಲಿಂಗ್ ಮಾಡದೇ ಎಡಬದಿಯಲ್ಲಿ ಗಟ್ಟಿದಾರದಿಂದ ಹೊಲಿಗೆ ಹಾಕಬೇಕು. ನಂತರ 300 GSM Art card ಗಳ ರಕ್ಷಾ ಪುಟಗಳನ್ನು ಪುಸ್ತಕದ ಮುಂಬದಿ ಹಾಗೂ ಹಿಂಬದಿಗಳಲ್ಲಿ ಮುದ್ರಿಸಿ ಅದರ ಮೇಲೆ ಇಲಾಖೆ ಕೋರುವ ವಿವರಗಳೊಡನೆ ಕೈ ಪಿಡಿಯನ್ನು Section Binding ಮಾಡಬೇಕು ರಕ್ಷಾ ಪುಟಕ್ಕೆ ನಿರ್ದೇಶಿಸಲ್ಪಟ್ಟಿರುವ 2 ಬಣ್ಣವನ್ನು ಉಪಯೋಗಿಸಿ ಮುದ್ರಿಸಬೇಕು. (ರಕ್ಷಾ ಪುಟಕ್ಕೆ ಬಳಸುವ ಕಾಗದದ ಮಾದರಿಯನ್ನು ಟೆಂಡರ್‌ನೊಂದಿಗೆ ಸಲ್ಲಿಸಬೇಕು).
4. ಮುದ್ರಣ ಘಟ್ಟ ತಲುಪಿದ ನಂತರ ಸಂಬಂದಿಸಿದ ಇಲಾಖಾ ಅಧಿಕಾರಿಗಳಿಂದ ಕರಡು ತಿದ್ದುಪಡಿ ಮಾಡಿಸಿ (ಕನಿಷ್ಠ 2 ಬಾರಿ ಪ್ರೂಫ್) ಶುದ್ಧ ಹಾಗೂ ಮುದ್ರಣಕ್ಕೆ ಯೋಗ್ಯವಾದ ಪ್ರತಿಗಳು ಸಿದ್ಧವಾದ ನಂತರವೇ ಮುದ್ರಣ ಕಾರ್ಯಕ್ಕೆ ತೊಡಗಬೇಕು.
5. ಪ್ರತಿ ವಿಷಯದ ಕೈಪಿಡಿಗಳನ್ನು 50 ಅಥವಾ 100 ರ ಕಟ್ಟುಗಳಲ್ಲಿ (ಸಾಗಾಣಿಕೆಗೆ ಅನುಕೂಲವಾಗುವ ರೀತಿಯಲ್ಲಿ ) ಗೋಣಿದಾರದಿಂದ ಭದ್ರವಾಗಿ ಕಟ್ಟಿ ಬಂಡಲ್ ಮೇಲೆ ಕೈಪಿಡಿಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸಬೇಕು.
6. ಕಳಪೆ ಗುಣಮಟ್ಟದ ಕಾಗದ ಬಳಸಿದ್ದಲ್ಲಿ ಅಥವಾ ಮುದ್ರಣವು ದೋಷ ಪೂರಿತವಾಗಿದ್ದಲ್ಲಿ ಅಂತಹ ಕೈಪಿಡಿಗಳನ್ನು ತಿರಸ್ಕರಿಸಲಾಗುವುದು.
7. ಕೈಪಿಡಿಗೆ ಸಂಬಂಧಿಸಿದ ಚಿತ್ರಗಳನ್ನು ಪಡೆದು ಉತ್ತಮವಾಗಿ ಸ್ಕ್ಯಾನ್ ಮಾಡಿ ಕೈಪಿಡಿಯಲ್ಲಿ ಸೂಕ್ತ ಪುಟಗಳಲ್ಲಿಯೇ ಮುದ್ರಿಸತಕ್ಕದ್ದು ಇಲ್ಲವಾದಲ್ಲಿ ಅಂತಹ ಕೈಪಿಡಿಯನ್ನು ತಿರಸ್ಕರಿಸಲಾಗುವುದು.
8. ಆದೇಶ ನೀಡಿದ ದಿನಾಂಕದಿಂದ 15 ದಿನಗಳೊಳಗಾಗಿ ಎಲ್ಲಾ ಕೈಪಿಡಿಗಳನ್ನು ಮುದ್ರಿಸಿ, ಸರಬರಾಜು ಮಾಡತಕ್ಕದ್ದು. ನಿಗದಿತ ದಿನಾಂಕದೊಳಗೆ ಸರಬರಾಜು ಮಾಡದಿದ್ದ ಪಕ್ಷದಲ್ಲಿ ಪ್ರತಿ ದಿನದ ವಿಳಂಬಕ್ಕೆ ರೂ.500/- ರಂತೆ ದಂಡ ವಿಧಿಸಲಾಗುವುದು.
9. ಸೀಲ್ ಮಾಡಿದ ಟೆಂಡರ್ ಜೊತೆಗೆ ಇ.ಎಂ.ಡಿ. ಹಣ ರೂ 5000/- ಗಳ ಬ್ಯಾಂಕ್ ಡಿ.ಡಿ. ಯನ್ನು ನಿರ್ದೇಶಕರು ವೃತ್ತಿ ಶಿಕ್ಷಣ ಇಲಾಖೆ, ಇವರ ಹೆಸರಿನಲ್ಲಿ ಪಡೆದು ಸಲ್ಲಿಸಬೇಕು. ಹಾಗೂ ಟೆಂಡರ್ ಫಾರಂಗಳನ್ನು ಖರೀದಿಸಿ ದಾಖಲೆಗೆ ರೂ.100/- ಗಳ ಮೂಲ ಚಲನ್‌ನ್ನು ಟೆಂಡರ್ ನೀಡುವ ಪ್ರಪತ್ರಕ್ಕೆ ಲಗತ್ತಿಸುವುದು.
10. ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಮತ್ತು ಮುದ್ರಣ ಕಾರ್ಯ ಕಡಿಮೆ ಮಾಡುವ /ಹೆಚ್ಚು ಮಾಡುವ ಅಥವಾ ರದ್ದುಗೊಳಿಸುವ ಹಕ್ಕು ನಿರ್ದೇಶಕರದಾಗಿರುತ್ತದೆ.

ನಿರ್ದೇಶಕರು
ಪಿ.ಆರ್. 73 ವೃತ್ತಿ ಶಿಕ್ಷಣ ನಿರ್ದೇಶನಾಲಯ

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ,**

**ಗ್ರಾಮಾಂತರ ಸಮಾಜಿಕ ಅರಣ್ಯ ವಿಭಾಗ, ವನ್ಯವಿಕಾಸ, ಬೆಂಗಳೂರು-3**

**ಸಂಖ್ಯೆ: ಎ4.ವಾಹನ ಹರಾಜು.740-1218/2003-04, ದಿನಾಂಕ: 30ನೇ ಜನವರಿ 2006**

**ಟೆಂಡರ್-ಕಂ-ಹರಾಜು ಮುಂದೂಡಿಕೆ ಪ್ರಕಟಣೆ**

**ವಿಷಯ:** ಹಳೆಯ ವಾಹನಗಳ ವಿಲೇವಾರಿ ಮಾಡಲು ಟೆಂಡರ್-ಕಂ-ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಯಥಾ ಸಂಖ್ಯೆಯ ಟೆಂಡರ್-ಕಂ-ಹರಾಜು ಪ್ರಕಟಣೆ ದಿನಾಂಕ: 5.1.2006.

ಈ ಕಛೇರಿಯ ಹಳೆಯ ವಾಹನಗಳ ವಿಲೇವಾರಿ ಮಾಡಲು ದಿನಾಂಕ: 30.1.2006 ರಂದು ಕರೆಯಲಾಗಿದ್ದ ಟೆಂಡರ್-ಕಂ-ಹರಾಜು ಮಾರಾಟವನ್ನು ಅನಿವಾರ್ಯ ಕಾರಣಗಳಿಂದಾಗಿ ಮುಂದೂಡಲಾಗಿದೆ. ಮುಂದಿನ ದಿನಾಂಕವನ್ನು ಮುಂದೆ ತಿಳಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 75 ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ, ಬೆಂಗಳೂರು.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಅಲ್ಪಾವಧಿ ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

ಈ ಕೆಳಕಂಡ ಕಾಮಗಾರಿಗೆ ಕರ್ನಾಟಕ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮದನ್ವಯ ಐಟಂವಾರು ಮೊಹರಾದ ಟೆಂಡರುಗಳನ್ನು 2 ಲಕೋಟೆ ಪದ್ಧತಿಯಲ್ಲಿ ಒಂದನೇಯ ದರ್ಜೆ ಅರ್ಹ ಲೋಕೋಪಯೋಗಿ ಗುತ್ತಿಗೆದಾರರು ಅಂದರೆ

ವೈಯಕ್ತಿಕ/ಫರ್ಮ್/ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ಫರ್ಮ್ ಅಥವಾ ಎರಡೂ ಹೊಂದಿರುವ ಪ್ರಮುಖಪಾಲುದಾರರಿಂದ ದಿ:6.3.2006ರ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ತಾಂತ್ರಿಕ ಬಿಡ್‌ನ್ನು ಅಂದೇ ತೆರೆಯಲಾಗುವುದು. ಇಲ್ಲವಾದಲ್ಲಿ ದಿ:7.3.2006 ರಂದು ತೆರೆಯಲಾಗುವುದು.

| | | | |
|---|---|---|---|
| 1. | ಕಾಮಗಾರಿಯ ಹೆಸರು | - | ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕಿರಿಮಂಜೇಶ್ವರ ಗ್ರಾಮದ ಎಡಮಾವಿನ ಹೊಳೆಗೆ ಅಡ್ಡಲಾಗಿ ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿ. |
| 2. | ಟೆಂಡರ್‌ಗೆ ಇಡಲಾದ ಮೊತ್ತ | - | ರೂ. 1,72,00.000.00 |
| 3. | ಇ.ಎಂ.ಡಿ. | - | ರೂ. 1,72,000.00 |
| 4. | ಟೆಂಡರ್ ಬುಕ್‌ಲೆಟ್ ದರ (ಎಲ್ಲಾ ತೆರಿಗೆ ಸೇರಿ) | - | ರೂ. 12,000.00 |
| 5. | ಕೆಲಸ ಪೂರ್ಣಗೊಳಿಸುವ ಅವಧಿ (ಮಳೆಗಾಲದ ಅವಧಿ ಹೊರತುಪಡಿಸಿ) | - | 6 ತಿಂಗಳು |
| 6. | ಅರ್ಹ ಗುತ್ತಿಗೆದಾರರ ದರ್ಜೆ | - | ಕ್ಲಾಸ್-1 |
| 7. | ಖಾಲಿ ಟೆಂಡರ್ ಫಾರಂ ಕೋರಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | - | 25.2.2006 |
| 8. | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ | - | 28.2.2006 |

ಮೇಲೆ ತಿಳಿಸಿರುವ ದಿನಾಂಕಗಳನ್ನು ಸಾರ್ವಜನಿಕ ರಜೆಯೆಂದು ಘೋಷಿಸಲ್ಪಟ್ಟಲ್ಲಿ ಆ ದಿನಗಳ ಮುಂದಿನ ದಿನಗಳಲ್ಲಿ ಆಯಾ ಕಾರ್ಯಕ್ರಮವನ್ನು ನಡೆಸಲಾಗುವುದು.

ಟೆಂಡರ್‌ಗಳನ್ನು 2 ಲಕೋಟೆಗಳಲ್ಲಿ ಅಂದರೆ (1) ತಾಂತ್ರಿಕ ಬಿಡ್ (2) ಫೈನಾನ್ಸಿಯಲ್ ಬಿಡ್‌ಗಳಲ್ಲಿ ಸಲ್ಲಿಸುವುದು.

**ತಾಂತ್ರಿಕ ಬಿಡ್ ಭಾಗ-1:**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದಿರುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1. ವೈಯಕ್ತಿಕ ಫರ್ಮ/ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಕೆಳಗಿನ ವಿವರ ಹೊಂದಿರಬೇಕು.
   2005-06ನೇ ಆರ್ಥಿಕ ಸಾಲಿನ ಹಿಂದಿನ 5 ವರ್ಷಗಳ ವಹಿವಾಟಿನ ವಿವರ (2000-01 ರಿಂದ 2004-05)
   1) 2000-01 ರಿಂದೀಚೆಗೆ ಕನಿಷ್ಠ 2 ಆರ್ಥಿಕ ವರ್ಷದಲ್ಲಿ ರೂ. 350.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ್ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು.
   ಅ) ಕಳೆದ 5 ವರ್ಷಗಳಲ್ಲಿ ವರ್ಷ 2004-05ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಶೇ. 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.
   2) ಪ್ರಮುಖ ಗುತ್ತಿಗೆದಾರರು 2000-01ರ ಈಚೆಗೆ ಕನಿಷ್ಠ ಇಂತಹದೇ ಒಂದು ಕಿಂಡಿ ಅಣೆಕಟ್ಟು/ಉಪ್ಪು ನೀರು ತಡೆ ಅಣೆಕಟ್ಟು/ಬ್ಯಾರೇಜ್/ ಇದೇ ಮಾದರಿಯ ಕಾಮಗಾರಿ ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಸಿಮೆಂಟ್ ಕಾಮಗಾರಿ, ಸ್ಟೀಲ್ ಒದಗಿಸಿ ಅಳವಡಿಸುವುದು, 2005-06ನೇ ಸಾಲಿನ ದರಗಳ ಮಟ್ಟಕ್ಕೆ) ರೂ. 88.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಇದೇ ಮೌಲ್ಯಕ್ಕೆ ಕಡಿಮೆ ಇರದ ಹಾಗೂ ಇದೇ ಮಾದರಿಯ ಒಂದು ಕಾಮಗಾರಿ) ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಿರಬೇಕು. ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತಃ ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.
   3) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| ಅ. | ಅಗೆತದ ಕೆಲಸ | 3000.00 ಘ.ಮಿ. |
| ಆ. | ಸಿಮೆಂಟ್ ಕಾಂಕ್ರೀಟ್ ಕೆಲಸ | 2500.00 ಘ.ಮಿ. |

2. **ಅರ್ಜಿದಾರರು ಪ್ರದರ್ಶಿಸುವುದು.**
   ಅ. ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹುದೇ ಅನುಭವವುಳ್ಳ ಒಬ್ಬ ಪ್ರೊಜೆಕ್ಟ್ ಮೆನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರನ್ನು ಹೊಂದಿರಬೇಕು.
   ಆ. ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ತಿ ಅಥವಾ ಹಣ ರೂಪದಲ್ಲಿ ಕನಿಷ್ಠ ರೂ. 55.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಲೈನ್ ಆಫ್ ಕ್ರೆಡಿಟ್) ಹೊಂದಿರಬೇಕು.
3. ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.
4. ತಾಂತ್ರಿಕ ಬಿಡ್‌ನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳಿಂದ ದೃಢೀಕರಿಸತಕ್ಕದ್ದು.
5. ಮುಖ್ಯವಾಗಿ ಹಾಗೂ ಮಹತ್ವದ್ದಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಸ್ವಂತ ಹೊಂದಿರಬೇಕು.

ಅ. ಕಾಂಕ್ರೀಟ್ ಮಿಕ್ಸರ್ (10/7 ಸಿ.ಎಫ್.ಟಿ.) - 5
ಆ. ಕಾಂಕ್ರೀಟ್ ಮಿಕ್ಸರ್ (0.50 ಘ.ಮಿ.) - 2
ಇ. ಟಿಪ್ಪರ್‌ಗಳು - 4
ಈ. ಎಕ್ಸಾವೇಟರ್‌ಗಳು - 2
ಉ. ಕಾಂಕ್ರೀಟ್ ವೈಬ್ರೇಟರ್‌ಗಳು (ಪಿನ್) - 5
ಊ. ಕಾಂಕ್ರೀಟ್ ವೈಬ್ರೇಟರ್‌ಗಳು (ಸರ್‌ಫೇಸ್) - 2
ಋ. ನೀರೆತ್ತುವ ಪಂಪ್‌ಗಳು - 50 ಅಶ್ವಶಕ್ತಿ

6. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಕಾಲ್ ಡಿಪೋಸಿಟ್, ಬ್ಯಾಂಕರ್ಸ್ ಚೆಕ್, ಡಿಮ್ಯಾಂಡ್ ಡ್ರಾಫ್ಟ್ ಬ್ಯಾಂಕ್ ಗ್ಯಾರಂಟಿ (ಅಧಿಕೃತ ಬ್ಯಾಂಕಿನಿಂದ 12 ತಿಂಗಳ ಅವಧಿಗೆ ಕಡಿಮೆ ಇಲ್ಲದಂತೆ) ರೂಪದಲ್ಲಿ ಸಲ್ಲಿಸುವುದು.
7. ತಾಂತ್ರಿಕ ಪರಿಣತಿ ಹೊಂದಿದ ಸಿಬ್ಬಂದಿ ವಿವರ.
8. ಗುತ್ತಿಗೆದಾರರು ರಾಜ್ಯ ಮಾರಾಟ/ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೋಂದಣಿ ಮಾಡಿಸಿರುವ ಬಗ್ಗೆ ನೋಂದಣಿ ಪತ್ರದ ಪ್ರತಿ ಹಾಗೂ ತಿರುವಳಿ ಪತ್ರದ ಪ್ರತಿಯನ್ನು ತಾಂತ್ರಿಕ ಬಿಡ್‌ನೊಂದಿಗೆ ಲಗತ್ತಿಸತಕ್ಕದ್ದು.

ಎರಡನೇ ಲಕೋಟೆ ಫೈನಾನ್ಸಿಯಲ್ ಬಿಡ್ ಕುರಿತಂತೆ ಇರತಕ್ಕದ್ದು.

ಮೊದಲು ಟೆಕ್ನಿಕಲ್ ಬಿಡ್ ಬಗೆಗಿನ ಲಕೋಟೆಯನ್ನು ತೆರೆಯಲಾಗುವುದು. ಇದು ಸಮರ್ಪಕವಿದ್ದಲ್ಲಿ ಫೈನಾನ್ಸಿಯಲ್ ಬಿಡ್ ಲಕೋಟೆಯಲ್ಲಿ ತೆರೆಯಲಾಗುವುದು.

ಟೆಂಡರ್ ಶೆಡ್ಯೂಲ್‌ಗೆ ನೀಡಲಾದ ಹಣವನ್ನು ಯಾವುದೇ ಸಂದರ್ಭದಲ್ಲಿ ಹಿಂದಿರುಗಿಸಲಾಗುವುದಿಲ್ಲ. ಗುತ್ತಿಗೆದಾರರು ಅರ್ಜಿ ಸಲ್ಲಿಸುವಾಗ ಗುತ್ತಿಗೆ ನೋಂದಣಿ ಪುಸ್ತಕವನ್ನು ಹಾಗೂ ಇದೇ ಮಾದರಿಯ ಕಾಮಗಾರಿ ನಿರ್ವಹಿಸಿದ ಬಗ್ಗೆ ಪ್ರಮಾಣ ಪತ್ರವನ್ನು ತಪ್ಪದೇ ತರತಕ್ಕದ್ದು. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾಧಿಕಾರಿಯವರು ಹೊಂದಿರುತ್ತಾರೆ. ಗುತ್ತಿಗೆದಾರರು ಟೆಂಡರ್ ಶೆಡ್ಯೂಲ್-ಬಿನಲ್ಲಿ ನಮೂದಿಸಿರುವ ಇಲಾಖಾ ದರಗಳಿಗಿಂತ ಕಡಿಮೆ ದರಗಳನ್ನು ನಮೂದಿಸಿದಲ್ಲಿ ಒಟ್ಟು ವ್ಯತ್ಯಾಸದ ಮೊತ್ತಕ್ಕೆ ಪೂರಕವಾಗಿ ಇ.ಎಂ.ಡಿ.ಯನ್ನು ಪ್ರತ್ಯೇಕವಾಗಿ ಫೈನಾನ್ಸಿಯಲ್ ಬಿಡ್‌ನೊಂದಿಗೆ ಸಲ್ಲಿಸತಕ್ಕದ್ದು. ಹೆಚ್ಚಿನ ವಿವರವನ್ನು ಕಛೇರಿ ಸಮಯದಲ್ಲಿ ಪಡೆದುಕೊಳ್ಳಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 76 ಸಣ್ಣ ನೀರಾವರಿ ವಿಭಾಗ, ಮಂಗಳೂರು

## ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-100

### ಪ್ರಕಟಣೆ

**ಸಂಖ್ಯೆ/ಬೆಂಕೇಕಾ/ಕಾ.ನಿ/8613/05-06, ದಿನಾಂಕ: 31ನೇ ಜನವರಿ 2006**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಛಯದಲ್ಲಿನ ಅಂಗಡಿ ಮಳಿಗೆಗಳಿಗೆ ಹರಾಜು ಮೂಲಕ ಸ್ವಧಾತ್ಮಕ ದರಗಳನ್ನು ಕರೆದು 2005-06ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ನೀಡುವ ಬಹಿರಂಗ ಹರಾಜನ್ನು ದಿನಾಂಕ: 6.3.2006 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4400 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು. ಸಮುಚ್ಛಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿ ಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ವಾಣಿಜ್ಯ ಮಳಿಗೆಯ ಹೆಸರು / ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|---|---|
| 1. | ಹಾಲಿನ ಕೇಂದ್ರ-04 | (3.25X6) (1 ಯೂನಿಟ್) | 11 ತಿಂಗಳು | 980/- | 9,800/- | 1,000/- |
| 2. | ಸಲೂನ್-01 | (3.25X6) (1 ಯೂನಿಟ್) | 11 ತಿಂಗಳು | 980/- | 9,800/- | 1,000/- |
| 3. | ವರ್ಕ್‌ಶಾಪ್-10 | (3.25X6) (1 ಯೂನಿಟ್) | 11 ತಿಂಗಳು | 980/- | 9,800/- | 1,000/- |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳ ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು, ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸಿದ ಅಥವಾ ತಿರಸ್ಕರಿಸುವ ಅಧಿಕಾರ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು, ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಪಿ.ಆರ್. 77 ಕೇಂದ್ರ ಕಾರಾಗೃಹ, ಬೆಂಗಳೂರು

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**(ಎರಡು ಲಕೋಟೆ ಪದ್ಧತಿಯಲ್ಲಿ)**

**ಸಂ.ಕಾಇಂ/ವಿವಿ ರಸ್ತೆ ಮತ್ತು ಕಟ್ಟಡಗಳು/ಬೆಂ/ಸ್ಇ-1/2005-06 2239-50/14ನೇ ಫೆಬ್ರವರಿ 2006**

**ಟೆಂಡರ್ ಪ್ರಕಟಣೆ ಸಂ.16/2005-06 ದಿನಾಂಕ: 10ನೇ ಫೆಬ್ರವರಿ 2006**

ಮೊಹರಾದ ಐಟಂವಾರು ಟೆಂಡರುಗಳನ್ನು ಕೆಳಕಾಣಿಸಿರುವ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 2000ರಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ನೊಂದಾಯಿಸಿರುವ ಒಂದನೇ ದರ್ಜೆಯ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಈ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗಿದ್ದು, ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕವಾಗಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ನಮೂದಿಸಿ, ಈ ಎರಡು ಮೊಹರಾದ ಟೆಂಡರ್‌ಗಳನ್ನು ಬೇರೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಬೇಕು. ಈ ಲಕೋಟೆಯ ಮೇಲ್ಭಾಗದಲ್ಲಿ ಕಾಮಗಾರಿಯ ಹೆಸರು, ಗುತ್ತಿಗೆದಾರರ ಸಂಪೂರ್ಣ ಅಂಚೆ ವಿಳಾಸ ಬರೆದು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಬೇಕು.

1. ಖಾಲಿ ಟೆಂಡರ್ ಫಾರಂಗಾಗಿ ಗುತ್ತಿಗೆದಾರರು ಅರ್ಜಿಗಳನ್ನು ಸಲ್ಲಿಸುವ ದಿ: 21.2.2006 ವೇಳೆ 5.30 ಗಂಟೆಯವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ನಿಗದಿಗೊಳಿಸಿರುವ ದಿ:24.2.2006 ವೇಳೆ 5.30 ಗಂಟೆಯವರೆಗೆ
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ನಿಗದಿಗೊಳಿಸಿರುವ ದಿ:28.ಯ2.2006 ವೇಳೆ 4.00 ಗಂಟೆಯವರೆಗೆ

ಭರ್ತಿ ಮಾಡಿದ ಟೆಂಡರ್‌ಗಳನ್ನು ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತ, ಬೆಂಗಳೂರು ಇವರ ಕಛೇರಿಯಲ್ಲಿಯೂ ದಿ:28.2.2006 ವೇಳೆ 4.00 ಗಂಟೆಯವರೆಗೆ ಪಿಡಬ್ಲ್ಯೂಜಿ-65 ಮತ್ತು 66 ಕೆಪಿಡಬ್ಲ್ಯೂಡಿ ಕೋಡ್ ಭಾಗ-2 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ-2000ರ ನಿಯಮಗಳಿಗೊಳಪಟ್ಟು ಸ್ವೀಕರಿಸಲಾಗುವುದು.

ಟೆಂಡರುಗಳನ್ನು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ತೆರೆಯಲಾಗುವುದು.

1. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ಸಾಧ್ಯವಾದಲ್ಲಿ ದಿ:28.2.2006 ವೇಳೆ 4.30 ಅಥವಾ ನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ವೇಳೆ.
2. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರಿಗೆ ಆರ್ಥಿಕ ಬಿಡ್ ತೆರೆಯುವ ದಿನಾಂಕ ಮತ್ತು ವೇಳೆಯನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಕೆಲಸದ ಮೊತ್ತ ಲಕ್ಷ ರೂಗಳಲ್ಲಿ | ಇ.ಎಂ.ಡಿ. ಮೊತ್ತ ರೂ. ಲಕ್ಷಗಳಲ್ಲಿ | ಟೆಂಡರ್ ಫಾರಂ ಬೆಲೆ ರೂ.ಗಳಲ್ಲಿ (ಹಿಂದಿರುಗಿಸಲಾಗುವುದಿಲ್ಲ) | ಕಾಮಗಾರಿ ಮುಗಿಸಲು ನಿಗದಿಗೊಳಿಸಿರುವ ಕಾಲಾವಧಿ (ಮಳೆಗಾಲ ಸೇರಿ) | ಅರ್ಹ ದರ್ಜೆಯ ಗುತ್ತಿಗೆದಾರರು | ಟೆಂಡರ್ ಕರೆಯ ಸಂಖ್ಯೆ |
|---|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ-7 ಪರಪ್ಪನ ಅಗ್ರಹಾರ ಗೇಟ್‌ನಿಂದ ನಾಗನಾಥಪುರ ಕೈಗೊಂಡನಹಲ್ಲಿ ಮತ್ತು ರಾಯಸಂದ್ರ ಮುಖಾಂತರ ಸರ್ಜಾಪುರ ರಸ್ತೆಯವರೆಗೆ ಅಭಿವೃದ್ಧಿ (ಜಿ.ಮು. ರಸ್ತೆ-6.60 ಕಿಮೀ) | 700/- | 7,00 | 70,000/- + ಇತರೆ ತೆರಿಗೆಗಳು | 12 ತಿಂಗಳು | 1ನೇ ದರ್ಜೆ | ಎರಡನೇ ಕರೆ |
| 2 | ರಾಷ್ಟ್ರೀಯ ಹೆದ್ದಾರಿ-7 ಪರಪ್ಪನ ಅಗ್ರಹಾರದಿಂದ ಎಇಸಿಎಸ್ ಬಡಾವಣೆ, ಕರೂಡ್ಲು ಮತ್ತು ಹರಳೂರು ಮಾರ್ಗವಾಗಿ ಬೆಂಗಳೂರು ಸರ್ಜಾಪುರ ರಸ್ತೆಗೆ ಸೇರುವ ರಸ್ತೆಯ ಅಭಿವೃದ್ಧಿ ಕೆಲಸ (ಜಿ.ಮು. ರಸ್ತೆ-6.50ಕಿಮೀ) | 700/- | 7.00 | 70,000/- + ಇತರೆ ತೆರಿಗೆಗಳು | 12 ತಿಂಗಳು | 1ನೇ ದರ್ಜೆ | ಎರಡನೇ ಕರೆ |

**ನಿಬಂಧನೆಗಳು**

1. ಗುತ್ತಿಗೆದಾರರು ಕೆಳಕಂಡ ಯಂತ್ರೋಪಕರಣಗಳಿಗೆ ಸಂಬಂಧಿಸಿದಂತೆ ಎಂ.ಓ.ಆರ್.ಟಿ. ಅಂಡ್ ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ 40:60 ಟಿ.ಪಿ.ಹೆಚ್. ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ ಮತ್ತು ಪೇವರ್ ಫಿನಿಷರನ್‌ನ ಮಾಲೀಕತ್ವ, ಲೀಜ್; ಬಾಡಿಗೆಗೆ ಹೊಂದಿರುವ ಬಗ್ಗೆ ಪುರಾವೆಗಳನ್ನು ಒದಗಿಸತಕ್ಕದ್ದು.
2. ಗುತ್ತಿಗೆದಾರರು ಕ್ರ.ಸಂ. 3 ರಿಂದ 9ರವರೆಗೆ ಯಂತ್ರೋಪಕರಣಗಳಿಗೆ ಮಾಲೀಕತ್ವ ಹೊಂದಿರುವ ಬಗ್ಗೆ ದಾಖಲಾತಿಗಳನ್ನು ಒದಗಿಸತಕ್ಕದ್ದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಬೇಕಾದ ಸಂ. | ಮಾಲೀಕತ್ವದ ಪುರಾವೆಗಳು |
|---|---|---|---|
| 1 | 40/60 ಟಿಪಿಹೆಚ್ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ ಫಿನಿಷರ್ | 1 | ಖರೀದಿಸಿದ ಇನ್ವಾಯ್ಸ್/ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್/ಲೀಜ್/ಬಾಡಿಗೆ ಕರಾರು ಅಥವಾ ಬಾಡಿಗೆಗೆ ಪಡೆದಿರುವ ಬಗ್ಗೆ ಮಾಲೀಕರ ಒಪ್ಪಿಗೆ ಪತ್ರದೊಂದಿಗೆ ಮೂಲಕ ಮಾಲೀಕತ್ವದ ದಾಖಲಾತಿಗಳು |
| 2 | ಪೇವರ್ ಫಿನಿಷರ್ | 1 | |
| 3 | ವೈಬ್ರೇಟರಿ ರೋಡ್ ರೋಲರ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 4 | ಸ್ಟಾಟಿಕ್ ರೋಡ್ ರೋಲರ್ | 2 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 5 | ಕಾಂಕ್ರೀಟ್ ಮಿಕ್ಸರ್ಸ್ | 2 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 6 | ವೈಬ್ರೇಟರ್‌ಗಳು | 4 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 7 | ಟಿಪ್ಪರ್‌ಗಳು | 6 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಮಾಲೀಕತ್ವ ದೃಢೀಕರನ ಪತ್ರ ಪಡೆದು ಸಲ್ಲಿಸಬೇಕು. |
| 8 | ವೆಹಿಕಲ್ ಮೌಂಟೆಂಡ್ ಬಿಟುನಸ್ ಮೆಕ್ಯಾನಿಕಲ್ ಸ್ಪ್ರೇಯರ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 9 | 40/60 ಟಿಪಿಹೆಚ್ ಸಾಮರ್ಥ್ಯದ ವೆಟ್ ಮಿಕ್ಸ್ ಪ್ಲಾಂಟ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ |

3. ಕಾಮಗಾರಿಗೆ ಸಂಬಂಧಪಟ್ಟಂತೆ ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಇದೇ ರೀತಿಯ ರಸ್ತೆ ಅಭಿವೃದ್ಧಿ ಕೆಲಸವನ್ನು ಈಗ ಟೆಂಡರ್‌ಗಿಟ್ಟಿರುವ ಮೊತ್ತದ ಕನಿಷ್ಠ ಶೇಕಡಾ-30ರಷ್ಟು ಮೊತ್ತದ ಕಾಮಗಾರಿಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುವ ಬಗ್ಗೆ ಪರ್ಯಾಯವಾಗಿ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಅಪೇಕ್ಷಿತ ಕಾಮಗಾರಿಯ ಮೊತ್ತದ ಶೇಕಡಾ-30ರಷ್ಟು ಇದೇ ರೀತಿಯ ಕಾಮಗಾರಿಯನ್ನು ನಿರ್ವಹಿಸಿ ಬಿಲ್ಲಾಗಿರುವುದರ ಬಗ್ಗೆ ಮೂಲ ದೃಢೀಕರಣ ಮೊತ್ತವನ್ನು ಸಂಬಂಧಿಸಿದ ಕಾರ್ಯಪಾಲಕ ಇಂಜಿನಿಯರ್‌ರವರಿಂದ/ ಸಕ್ಷಮ ಪ್ರಾಧಿಕಾರದಿಂದ ದಾಖಲಾತಿ ಪಡೆದು ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಬೇಕು. ತಾಂತ್ರಿಕ ಬಿಡ್‌ನಲ್ಲಿ ಪ್ರತಿಯೊಂದು ನಮೂನೆಯನ್ನು ಭರ್ತಿ ಮಾಡಿ ಪ್ರತಿ ಪುಟದಲ್ಲಿಯೂ ಗುತ್ತಿಗೆದಾರಕರು ಸಹಿ ಮಾಡಬೇಕು.
   ಗುತ್ತಿಗೆದಾರರು ಆರ್ಥಿಕ ವರ್ಷವಾರು ಪೂರ್ಣಗೊಳಿಸಿದ ಕಾಮಗಾರಿಗಳ ವಿವರಗಳನ್ನು (ಆರ್ಥಿಕ ಮತ್ತು ಭೌತಿಕ) ತಾಂತ್ರಿಕ ಬಿಡ್‌ನಲ್ಲಿ ಸಲ್ಲಿಸತಕ್ಕದ್ದು.
4. ಗುತ್ತಿಗೆದಾರರು ಟೆಂಡರ್ ಫಾರಂಗಳ ಬೆಲೆಯನ್ನು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಡಿಡಿ ಅಥವಾ ನಗದು ರೂಪದಲ್ಲಿ ಅರ್ಜಿಯ ಜೊತೆ ಪಾವತಿ ಮಾಡಬೇಕು. ಅರ್ಜಿಯ ಜೊತೆಯಲ್ಲಿ ಗುತ್ತಿಗೆದಾರರು ನೊಂದಣಿ ಪುಸ್ತಕದ ಕಾಮಗಾರಿಯ ವಿವರಗಳೊಂದಿಗೆ ದಾಖಲಿಸಿ ಪ್ರತಿಯನ್ನು ಹಾಗೂ ಇತ್ತೀಚಿನ ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ತಪ್ಪಿದಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
5. ಇ.ಎಂ.ಡಿ. ಮೊತ್ತವನ್ನು ಷೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್‌ಗಳ ಎಫ್.ಡಿ.ಆರ್., ಡಿ.ಡಿ., ಎನ್.ಎಸ್.ಸಿ. (ಕಾರ್ಯಪಾಲಕ ಇಂಜಿನಿಯರ್ ಇವರ ಹೆಸರಿಗೆ ಪ್ಲೆಡ್ಜ್ ಮಾಡಬೇಕು) ಬ್ಯಾಂಕರ್ಸ್ ಗ್ಯಾರಂಟಿ, ಬ್ಯಾಂಕರ್ಸ್ ಚೆಕ್ ಇತ್ಯಾದಿಗಳ ರೂಪದಲ್ಲಿ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಸಲ್ಲಿಸಬೇಕು.
6. ತಾಂತ್ರಿಕ ಬಿಡ್‌ನ ಎಲ್ಲಾ ದಾಖಲಾತಿಗಳನ್ನು ನೋಟರಿಯವರಿಂದ ಪ್ರಮಾಣೀಕರಿಸಿ ಅಥವಾ ಕಾರ್ಯಪಾಲಕ ಇಂಜಿನಿಯರ್‌ರವರಿಗಿಂತ ಮೇಲ್ಪಟ್ಟ ಅಧಿಕಾರಿಯವರಿಂದ ಪ್ರಮಾಣೀಕರಿಸಿ ಲಗತ್ತಿಸಬೇಕು. ಟೆಂಡರ್ ತೆರೆಯುವ ದಿನ ಗುತ್ತಿಗೆದಾರರ ಮೂಲ ದಾಖಲೆಗಳನ್ನು ಪರಿಶೀಲನೆಗೆ ಸಲ್ಲಿಸಬೇಕು. ತಪ್ಪಿದಲ್ಲಿ ಟೆಂಡರನ್ನು ಅನರ್ಹಗೊಳಿಸಲಾಗುವುದು.
7. ಜಾಯಿಂಟ್ ವೆಂಚರ್‌ನಲ್ಲಿನ ಪಾಲುದಾರರು: ಸದಸ್ಯರುಗಳು ಪ್ರತ್ಯೇಕವಾಗಿ ಟೆಂಡರು ಸಲ್ಲಿಸುವಾಗ ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿ ನಿರ್ವಹಿಸಿದ ಕಾಮಗಾರಿಗಳ ಬಗ್ಗೆ ದೃಢೀಕರಣ ಮತ್ತು ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿರುವ ಯಂತ್ರೋಪಕರಣಗಳ ಮಾಲೀಕತ್ವವನ್ನು ಪರಿಗಣಿಸಲಾಗುವುದಿಲ್ಲ.
8. ನಿಬಂಧನೆಗೊಳಪಟ್ಟ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
9. ಆರ್ಥಿಕ ಬಿಡ್‌ನ ಷೆಡ್ಯೂಲ್-ಬಿ ನಲ್ಲಿ ಐಟಂವಾರು ದರಗಳನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸಬೇಕು.
10. ಯಾವುದೇ ಟೆಂಡರ್‌ನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಕ್ಷಮ ಪ್ರಾಧಿಕಾರಕ್ಕೆ ಇರುತ್ತದೆ.
11. ಹೆಚ್ಚಿನ ಮಾಹಿತಿಗಳನ್ನು ಕೆಳಗೆ ಸಹಿ ಮಾಡಿರುವವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
12. ಯಶಸ್ವಿ ಗುತ್ತಿಗೆದಾರರು ಕಾರ್ಯಾದೇಶ ನೀಡಿದ 30 ದಿನಗಳೊಳಗೆ ಕಡ್ಡಾಯವಾಗಿ ಕಾಮಗಾರಿ ಸ್ಥಳದಿಂದ 50 ಕಿಮೀ ಒಳಗೆ ನಿಗದಿತ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ ಅನ್ನು ಸ್ವಂತ ಜವಾಬ್ದಾರಿಯ ಮೇಲೆ ಸ್ಥಾಪಿಸಬೇಕು ಹಾಗೂ ಸೂಚಿನಕ್ಷೆಯಲ್ಲಿ ಹಾಟ್ ಮಿಕ್ಸ್ ಸ್ಥಳವನ್ನು ನಕ್ಷೆಯಲ್ಲಿ ಗುರುತಿಸಿ ಕಾರ್ಯಪಾಲಕ ಇಂಜಿನಿಯರ್ ರವರಿಗೆ ಸಲ್ಲಿಸಬೇಕು.
13. ಟೆಂಡರಿಗಿಟ್ಟ ಮೊತ್ತದ ಶೇ.30 ರಷ್ಟು ಮೊತ್ತಕ್ಕೆ ಷೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಲೈನ್ ಆಫ್ ಕ್ರೆಡಿಟ್ ಅನ್ನು ನಿಗದಿತ ನಮೂನೆ-ಕೆ ಯಲ್ಲಿ ಸಂಬಂಧಿಸಿದ ಕಾಮಗಾರಿಯ ಹೆಸರಿನೊಂದಿಗೆ ಭರ್ತಿ ಮಾಡಿ ನಿಗದಿತ ನಮೂನೆಯಲ್ಲಿ ತಾಂತ್ರಿಕ ಬಿಡ್‌ನೊಂದಿಗೆ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
14. ಈ ಕಾಮಗಾರಿಗಳ ಗುಣಮಟ್ಟವನ್ನು ಕಾಯ್ದುಕೊಂಡು, ಕಾಮಗಾರಿ ಪೂರ್ಣಗೊಂಡ ನಂತರ ಮೂರು ವರ್ಷಗಳವರೆಗೆ ರಸ್ತೆ ನಿರ್ವಹಣೆಯನ್ನು ಗುತ್ತಿಗೆದಾರರ ವೆಚ್ಚದಲ್ಲಿಯೇ ನಿರ್ವಹಿಸಬೇಕು ಎಂಬ ನಿಬಂಧನೆಯೊಂದಿಗೆ ಅನುಷ್ಠಾನಗೊಳಿಸಬೇಕು. ಈ ಸಂಬಂಧವಾಗಿ ಬಿಲ್ಲುಗಳಲ್ಲಿ ಶೇ.3ರಂತೆ ಇಡಿಗಂಟು ಮೊತ್ತವನ್ನು ಎಫ್ ಎಸ್ ಡಿಯ ಜೊತೆ ಕಟಾಯಿಸಿಕೊಳ್ಳಲಾಗುವುದು ಮತ್ತು ಪ್ರತಿ ನಿರ್ವಹಣೆ ವರ್ಷ ಪೂರ್ಣಗೊಂಡ ನಂತರ ಶೇ.1ರಂತೆ ಬಿಡುಗಡೆಗೊಳಿಸಲಾಗುವುದು.

15. ಕಾಮಗಾರಿಗಳಿಗೆ ಅವಶ್ಯವಿರುವ ಸಾಮಗ್ರಿಗಳಾದ ಬಿಟುಮನ್ ಉಕ್ಕು ಮತ್ತು ಸಿಮೆಂಟ್‌ನ್ನು ಗುತ್ತಿಗೆದಾರರೇ ಸರಬರಾಜು ಮಾಡಿಕೊಂಡು ಗುಣನಿಯಂತ್ರಣ ಅಧಿಕಾರಗಳಿಂದ ಗುಣಮಟ್ಟದ ಬಗ್ಗೆ ದೃಢೀಕರಣ ಪತ್ರ ಪಡೆಯಬೇಕು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಸರಬರಾಜು ಮಾಡುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,
ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು

ಪಿ.ಆರ್. 94

**IN THE COURT OF THE IV ADDITIONAL CITY CIVIL JUDGE AT BANGALORE**
**(C.C.H.No.21)**
**P&S.C.No. 15004/2006**
**IN THE MATTER OF LATE C.BALACHANDRAN**

**PETITIONERS:** **AND** **RESPONDENTS:**

1. Smt SUYAMBU
   Aged about, 51 Years
   W/o Late C. Balachandran
2. Sri B. SHAKTHI KUMARAN
   Aged about, 30 years
   S/o Late C. Balachandran
3. Sri B. MAHESH KUMAR
   Aged about, 28 years
   S/o Late C. Balachandran
4. Miss B. GEETHA KUMAR KIRUBA
   Aged about, 26 years
   D/o Late C. Balachandran
5. Sri B. ARUL KUMARAN
   Aged about, 23 years
   S/o Late C. Balachandran
   All are Residing at At No.1/1,
   14th Cross, K.B. Temple Street, 6th Block,
   Rajajinagar, BANGALORE-560 010.

RESPONDENTS: NIL

**PUBLIC NOTICE**

WHEREAS, the petitioners/applicants above named have filed an application under section 372 of the Indian Succession act, 1925, for grant of Succession certificate, in respect of the estate of the deceased C. Balachandran, who died on 27.6.2005 at No. 1/1, 14th cross K.B. Tem,ple Street, 6th Block, Rajajinagar, BANGALORE-560 010., No Caveat has been entered and the court has fixed 01st day March 2006 for hearing of the said Petition, Interested persons may enter apperance on that day, Given under my hand and seal of the court on this 13th day of February of 2006.

**SCHEDULE**

That the Amount being a sum of Rs.13,86,123/- (Rupees Thirteen Lakhs Eighty Six Thousand One Hundred and Twenty Three Only), Deposited in Savings Bank Account No.0642500101958501 at Karnataka Bank, Rajajinagar Branch, BANGALORE.

By Order of the Court
Asst. Registrar,
City Civil Court, Mayo Hall, Bangalore-1.

P.D. 21

**IN THE COURT OF ADDITIONAL CITY CIVIL COURT JUDGE, MAYO HALL UNIT, BANGALORE**
**CCH3/421) HG 15-2-06**
**P&S.C.No. 15026/2005**

**PETITIONERS:** **AND** **RESPONDENTS:**

1. Smt Ramulamma,
   W/o late N. Ramakrishnaiah
   45 years
2. R. Venkatamahesh,
   S/o late N. RAmakrishnaiah 27 years.
3. R. Subhahini
   d/o late N. Ramakrishnaiah 26 years.
4. R. Venugopalakrishna
   S/o late N. Ramakrishnaiah 23 years

RESPONDENTS:
LIC Housing Finance Ltd.,
No.4, Canara Mutual, utual Building,
Residency Road, Bangalore-560 025

**PUBLIC NOTICE**

WHEREAS the petitioner above named filed the petition before this court under Sec. 372 of the Indian Succession Act for grant of Succession Certificate in respect of the securities of the deceased Sri N. Ramakrishnaiah who died on 19.5.2003.

Be it known that no caveat has been entered and the said petition is posted for hearing on 15.3.2006. All persons claiming to have any interest may come and see the proceedings before grant of Succession Certificate in respect of the amount through shares.

Given under my hand and the seal of the Court, this the 16th day of February, 2006.

By Order of the Court
Asst. Registrar,
City Civil Court, Mayo Hall, Bangalore.

P.D. 22

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

**ಅಲ್ಪಾವಧಿ ಟೆಂಡರ್ ಪ್ರಕಟಣೆ: /2005-06 ದಿನಾಂಕ: 10ನೇ ಫೆಬ್ರವರಿ 2006**

ಮೊಹರಾದ ಶೇಕಡಾರಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೊಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ 4.3.2006 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 6.3.2006 ಸಂಜೆ 5.30 ರವರೆಗೆ
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 7.3.2006 ಸಂಜೆ 4.00 ರವರೆಗೆ
4. ಕೆಲಸವನ್ನು ಮುಗಿಸುವ ಅವಧಿ: ಒಂದು ತಿಂಗಳು

ಟೆಂಡರ್ ಫಾರಂಗಳನ್ನು ದಿನಾಂಕ: 7.3.2006 ಸಂಜೆ 4.00 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೊಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್ ಗೆ ಇಡಲಾದ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | Protection work to Gondi Canal near Kerebeeranahalli | 49,200/- | 1250/- | 200/- | Class-III and above |
| 2 | Repairs to breadhed portion at 60.10 Km. of Gondi Canal near Arahatholalu village | 49,438/- | 1250/- | 200/- | " |
| 3 | Repairs and Improvements to Right Bank Canal Gear box system and platform of Jambadahalla Reservoir project | 1,38,035/- | 3500/- | 300/- | " |
| 4 | Removal of silt and construction of P.O.in S-7 branch canal of 22nd Distributory of BRRBC. | 23,749/- | 595/- | 200/- | " |

**ಸೂಚನೆಗಳು:**

1) ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2) ಇ.ಎಂ.ಡಿ. ಮೊತ್ತವನ್ನು ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಟಿ.ಡಿ.ಆರ್ ಮತ್ತು ಬ್ಯಾಂಕ್ ಗ್ಯಾರಂಟಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟನ್ನು ಕಾರ್ಯಪಾಲಕ ಇಂಜಿನಿಯರ್ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು. ತಪ್ಪಿದಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3) ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4) ಇಂ.ಎಂ.ಡಿ.ಯ ಠೇವಣಿ ಕ್ರಮಬದ್ಧತೆಯ (ವ್ಯಾಲಿಡಿಟಿಪೀರಿಯಡ್) 90 ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5) ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ ಸ್ವೀಕರಿಸಿವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.
7) ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8) ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
9) ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
10) ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿಯೇ ಪೂರ್ಣಗೊಳಿಸಬೇಕು ಹಾಗೂ ಕಾಮಗಾರಿಗೆ ಅಗತ್ಯವಿರುವ ಸಾಮಗ್ರಿ ಮತ್ತು ಯಂತ್ರೋಪಕರಣಗಳನ್ನು ಮುಂಚಿಯೇ ಮುಂಗಡವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.

**ಎಸ್.ಹೆಚ್. ಮಂಜಪ್ಪ**
ಕಾರ್ಯಪಾಲಕ ಅಭಿಯಂತರರು,
ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

ಪಿ.ಆರ್. 92